


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 18-03-2021 ಪ್ರಶ್ನೆ ಸಂಖ್ಯೆ : 1346(1641)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 18-03-2021

ಉತ್ತರಿಸುವ ಸಚಿವರು: ಮಾನ್ಯ ಅಬಕಾರಿ ಸಚಿವರು

ವಿಷಯ : ಅಬಕಾರಿ ಇಲಾಖೆಯಲ್ಲಿನ ಅಕ್ರಮ ಮದ್ಯ ಮಾರಾಟ ತಡೆಗಟ್ಟುವಲ್ಲಿ ಸಿಬ್ಬಂದಿಗಳ ಕೊರತೆ ಕುರಿತು

(ಅ) ರಾಜ್ಯದಲ್ಲಿನ ಅಬಕಾರಿ ಇಲಾಖೆಯ ವಿವಿಧ ಹಂತದ ಕಛೇರಿಗಳು ಯಾವುವು; ಅವುಗಳಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ ಎಷ್ಟು; ಕೊರತೆಯಿರುವ ಹುದ್ದೆಗಳ ಸಂಖ್ಯೆ ಎಷ್ಟು; ಕೊರತೆಯನ್ನು ಯಾವಾಗ ತುಂಬಲಾಗುವುದು; (ಜಿಲ್ಲಾವಾರು, ತಾಲ್ಲೂಕುವಾರು, ಹುದ್ದೆವಾರು ಮಾಹಿತಿಯನ್ನು ನೀಡುವುದು)

(ಆ) ರಾಜ್ಯದಲ್ಲಿ ಅಬಕಾರಿ ಇಲಾಖೆಯಿಂದ ಮದ್ಯ ಮಾರಾಟಕ್ಕೆ ಎಷ್ಟು ವಿಧದ ಪರವಾನಗಿ ನೀಡಲಾಗುತ್ತದೆ; ವಿವಿಧ ಪರವಾನಗಿ ಪಡೆದ ಮದ್ಯದ ಅಂಗಡಿಗಳ ಸಂಖ್ಯೆ ಎಷ್ಟು; ಅವು ಯಾವುವು; (ತಾಲ್ಲೂಕುವಾರು ಮತ್ತು ಪರವಾನಗಿದಾರರ ವಿಳಾಸದೊಂದಿಗೆ ಮಾಹಿತಿಯನ್ನು ನೀಡುವುದು)

(ಇ) ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಅಬಕಾರಿ ಇಲಾಖೆಯಿಂದ ಸಂಗ್ರಹವಾದ ಆದಾಯವೆಷ್ಟು; ಇಲಾಖೆಯಿಂದ ಅಬಕಾರಿ ಕಾನೂನಿನ ಅನ್ವಯ ದಾಖಲಿಸಿದ ಪ್ರಕರಣಗಳೆಷ್ಟು; ಅವುಗಳಲ್ಲಿ ಜಪ್ತಿ ಮಾಡಿದ ಸ್ವತ್ತಿನ ಮೌಲ್ಯವೆಷ್ಟು; (ಜಿಲ್ಲಾವಾರು, ವರ್ಷವಾರು ಮಾಹಿತಿಯನ್ನು ನೀಡುವುದು)

(ಈ) ನಕಲಿ ಮದ್ಯ ಮಾರಾಟ ಮತ್ತು ಅಕ್ರಮ ಮದ್ಯದ ಮಾರಾಟವನ್ನು ಪತ್ತೆ ಹಚ್ಚುವಲ್ಲಿ ಇಲಾಖಾ ಸಿಬ್ಬಂದಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು; ಅಕ್ರಮವನ್ನು ತಡೆದು ರಾಜ್ಯದ ಬೊಕ್ಕಸದ ಸೋರಿಕೆಯನ್ನು ತಡೆಯುವಲ್ಲಿ ಸರ್ಕಾರದ ಕ್ರಮಗಳಾವುವು?